ಶಿಮೂಲ್ I-C
ದಿ-10-03-2021
Starred

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1455
ಸದಸ್ಯರ ಹೆಸರು : ಶ್ರೀ ರವೀಂದ್ರ ಶ್ರೀಕಂಠಯ್ಯ
ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 10.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಶ್ರೀರಂಗಪಟ್ಟಣ ತಾಲ್ಲೂಕಿನ ಅರಕೆರೆ ಗ್ರಾಮದಲ್ಲಿ ಸಾರಿಗೆ ಸಂಸ್ಥೆಯ ಬಸ್ ನಿಲ್ದಾಣ ಇಲ್ಲದೆ ಸಾರ್ವಜನಿಕರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶ್ರೀರಂಗಪಟ್ಟಣ ತಾಲ್ಲೂಕಿನ ಅರಕೆರೆ ಗ್ರಾಮದಲ್ಲಿ ಬಸ್ ನಿಲ್ದಾಣ ಇಲ್ಲದೆ ಇರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ. | ಈ ಬಸ್ ನಿಲ್ದಾಣಕ್ಕೆ ಜಮೀನು ಮಂಜೂರಾಗಿದ್ದರೂ ಇದುವರೆವಿಗೂ ಬಸ್ ನಿಲ್ದಾಣ ನಿರ್ಮಾಣಕ್ಕೆ ಸರ್ಕಾರ ಮುಂದಾಗದಿರಲು ಕಾರಣಗಳೇನು; | ಈ ಬಸ್ ನಿಲ್ದಾಣಕ್ಕೆ ನಿವೇಶನ ಮಂಜೂರಾಗಿರುವುದಿಲ್ಲ. ಸರ್ವೆ ನಂ.102ರಲ್ಲಿರುವ 2.23 ಗುಂಟೆ ನಿವೇಶನವನ್ನು ಪರಿಶೀಲಿಸಲಾಗಿ, ಸ್ಮಶಾನದ ಜಮೀನಾಗಿರುವ ಸದರಿ ನಿವೇಶನವು ಅರಕೆರೆ ಗ್ರಾಮದ ಮುಖ್ಯರಸ್ತೆಯಿಂದ ಸುಮಾರು 0.5 ಕಿ.ಮೀ. ದೂರವಿದ್ದು, ಊರ ಹೊರವಲಯದಲ್ಲಿ ಜನವಸತಿ ಪ್ರದೇಶದಿಂದ ದೂರವಿರುತ್ತದೆ. ಸದರಿ ಜಮೀನು ಬಸ್ ನಿಲ್ದಾಣ ನಿರ್ಮಾಣಕ್ಕೆ ಸೂಕ್ತವಾಗಿಲ್ಲದ ಹಿನ್ನೆಲೆಯಲ್ಲಿ ಸೂಕ್ತ ನಿವೇಶನಕ್ಕಾಗಿ ಪರಿಶೀಲಿಸಲಾಗುತ್ತಿದೆ.<br><br>ದಿನಾಂಕ: 27/01/2021ರಂದು ಮಾನ್ಯ ಶಾಸಕರ ಗೃಹ ಕಛೇರಿಯಲ್ಲಿ ನಡೆದ ಸಭೆಯಲ್ಲಿ ಅರಕೆರೆಯಲ್ಲಿ ಬಸ್ ನಿಲ್ದಾಣ ನಿರ್ಮಿಸುವ ಕುರಿತು ಚರ್ಚಿಸಲಾಗಿದ್ದು, ಸದರಿ ಸಭೆಯಲ್ಲಿ, ಮಾನ್ಯ ಶಾಸಕರು ಈ ಹಿಂದೆ ಪ್ರಸ್ತಾವನೆ ಸಲ್ಲಿಸಿದ್ದ ಸರ್ವೆ ನಂ.102ರ 02 ಎಕರೆ 23 ಗುಂಟೆ ನಿವೇಶನದಲ್ಲಿ ಬಸ್ ನಿಲ್ದಾಣವನ್ನು ನಿರ್ಮಿಸುವುದು ಸೂಕ್ತವೆಂದು ಅಭಿಪ್ರಾಯಿಸಿರುತ್ತಾರೆ.<br><br>ಮುಂದುವರೆದು, ಅಪರ ಜಿಲ್ಲಾಧಿಕಾರಿಗಳು, ಮಂಡ್ಯ, ಇವರನ್ನು ಸದರಿ ಜಮೀನಿನ ಕುರಿತು ಸಂಪರ್ಕಿಸಲಾಗಿ ಉದ್ದೇಶಿತ ಜಮೀನನ್ನು ಮಂಜೂರು ಮಾಡಲು ಸರ್ಕಾರದಿಂದ ನಿಗಧಿಪಡಿಸುವ ಮೌಲ್ಯದ ಮೊತ್ತವನ್ನು ಸಂಸ್ಥೆಯ ವತಿಯಿಂದ ಸರ್ಕಾರಕ್ಕೆ ಪಾವತಿಸುವ ಷರತ್ತಿಗೊಳಪಟ್ಟು ಪತ್ರ ನೀಡಿದಲ್ಲಿ, ಉದ್ದೇಶಿತ ಜಮೀನಿನ ಆರ್.ಟಿ.ಸಿ ಕಾಲಂ 09ರಲ್ಲಿ "ಸ್ಮಶಾನ" ಎಂದು ನಮೂದಿಸಿರುವ ಜಾಗದಲ್ಲಿ ಕ.ರಾ.ರ.ಸಾ.ನಿಗಮ ಬಸ್ ನಿಲ್ದಾಣ ಎಂದು ತಿದ್ದುಪಡಿ ಮಾಡಿ, ಜಮೀನಿನ ಮೌಲ್ಯವನ್ನು ನಿಗದಿಪಡಿಸಿಕೊಡುವುದಾಗಿ ತಿಳಿಸಿ, ಸದರಿ ಮೊತ್ತವನ್ನು ಸರ್ಕಾರಕ್ಕೆ ಪಾವತಿಸಿದ ನಂತರ ಉದ್ದೇಶಿತ ಜಮೀನನ್ನು ನಿಗಮದ ಹೆಸರಿಗೆ ಹಸ್ತಾಂತರ ಮಾಡಿಕೊಡುವುದಾಗಿ ತಿಳಿಸಿರುತ್ತಾರೆ.<br><br>ಪ್ರಸ್ತುತ ಕೋವಿಡ್-19 ಸಾಂಕ್ರಾಮಿಕ ರೋಗದ ಪಿಡುಗಿನಿಂದಾಗಿ ನಿಗಮವು ತೀವ್ರ ಆರ್ಥಿಕ ಸಂಕಷ್ಟದಲ್ಲಿದ್ದು, ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ತುಂಬಾ ಕಷ್ಟಕರವಾಗಿದೆ. ಆದಾಗ್ಯೂ ನಿಗಮದ ಆರ್ಥಿಕ ಲಭ್ಯತೆ ಹಾಗೂ ಸಾರಿಗೆ ಅವಶ್ಯಕತೆಯನ್ನು ಆಧರಿಸಿ ಸಂಸ್ಥೆಯು ಬಸ್ ನಿಲ್ದಾಣ ನಿರ್ಮಾಣ ಮಾಡಲು ಹೊರಡಿಸಿರುವ ಸುತ್ತೋಲೆ ಸಂಖ್ಯೆ:01/2015-16, ದಿ:06.06.2015ರ ಪ್ರಕಾರ ಪರಿಶೀಲಿಸಿ ಈ ಬಗ್ಗೆ ಕ್ರಮ ಜರುಗಿಸಲಾಗುವುದು. |
| ಇ. | ಅರಕೆರೆಯಲ್ಲಿ ಬಸ್ ನಿಲ್ದಾಣ ನಿರ್ಮಾಣಕ್ಕೆ ಸರ್ಕಾರವು ಈಗಲಾದರೂ ಮುಂದಾಗುವುದೇ? | |

ಸಂಖ್ಯೆ: ಟಿಡಿ 63 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1450

ಸದಸ್ಯರ ಹೆಸರು : ಶ್ರೀ ಅಶೋಕ್ ನಾಯಕ್ ಕೆ.ಬಿ.
(ಶಿವಮೊಗ್ಗ ಗ್ರಾಮಾಂತರ)

ಉತ್ತರಿಸುವ ದಿನಾಂಕ : 10-03-2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಶಿವಮೊಗ್ಗ ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ 2018-19 ರಿಂದ 2020-21 ನೇ ಸಾಲಿನಲ್ಲಿ ಸಾಮಾನ್ಯ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಎಷ್ಟು ರೈತ ಫಲಾನುಭವಿಗಳಿಗೆ ಟ್ರ್ಯಾಕ್ಟರ್ ಮತ್ತು ಮಿನಿ ಟ್ರ್ಯಾಕ್ಟರ್ ವಾಹನಗಳು ಹಾಗೂ ಸಾಧನ ಸಲಕರಣೆಗಳನ್ನು ವಿತರಿಸಲಾಗಿದೆ; | ಕೃಷಿ ಇಲಾಖೆಯಲ್ಲಿ 25 PTO HP ವರೆಗಿನ ಮಿನಿ ಟ್ರ್ಯಾಕ್ಟರ್, ಪವರ್ ಟಿಲ್ಲರ್ ಮತ್ತು ಇತರೆ ಸಾಧನ ಸಲಕರಣೆಗಳನ್ನು ಸಹಾಯಧನ ಒದಗಿಸಿ ವಿತರಿಸಲಾಗುತ್ತಿದೆ. 2018-19 ರಿಂದ 2020-21 ನೇ ಸಾಲಿನಲ್ಲಿ ಶಿವಮೊಗ್ಗ ಗ್ರಾಮಾಂತರ ವಿಧಾನಸಭಾ ಕ್ಷೇತ್ರದ ಸಾಮಾನ್ಯ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ರೈತ ಫಲಾನುಭವಿಗಳಿಗೆ ವಿತರಿಸಲಾದ ಟ್ರ್ಯಾಕ್ಟರ್, ಮಿನಿ ಟ್ರ್ಯಾಕ್ಟರ್ ವಾಹನಗಳು ಪವರ್ ಟಿಲ್ಲರ್ ಹಾಗೂ ಸಾಧನ ಸಲಕರಣೆಗಳ ವಿವರ ಕೆಳಕಂಡಂತಿರುತ್ತದೆ: |

ಭೌತಿಕ-ಸಂಖ್ಯೆಗಳಲ್ಲಿ

| ಕ್ರ.ಸಂ | ವಿವರ/ಪರಿಕರ | ಆರ್ಥಿಕ ವರ್ಷ | ಸಾಮಾನ್ಯ | ಪ.ಜಾತಿ | ಪ.ಪಂಗಡ |
|---|---|---|---|---|---|
| 1 | ಮಿನಿ ಟ್ರ್ಯಾಕ್ಟರ್ | 2018-19 | 8 | 0 | 0 |
| 2 | | 2019-20 | 1 | 0 | 0 |
| 3 | | 2020-21 | 0 | 0 | 0 |
| ಒಟ್ಟು | | | 9 | 0 | 0 |
| 1 | ಪವರ್ ಟಿಲ್ಲರ್ | 2018-19 | 27 | 20 | 10 |
| 2 | | 2019-20 | 22 | 0 | 0 |
| 3 | | 2020-21 | 45 | 5 | 0 |
| ಒಟ್ಟು | | | 94 | 25 | 10 |
| 1 | ಇತರೆ ಸಲಕರಣೆಗಳು | 2018-19 | 338 | 67 | 29 |
| 2 | | 2019-20 | 555 | 124 | 32 |
| 3 | | 2020-21 | 464 | 38 | 20 |
| ಒಟ್ಟು | | | 1357 | 229 | 81 |

In Agriculture Department, 25 PTO HP Tractor, Power Tiller and other farm machineries are distributed by providing subsidy.

The details of the Tractors and Mini Tractors and other farm machineries issued to General, Schedule Caste and Scheduled Tribe Farmers during the financial year 2018-19 to 2020-21 in Shimogga (Rural) is as below:

(Physical-in numbers)

| Sl No | Details | Financial Year | General | Schedule Caste | Scheduled Tribe |
|---|---|---|---|---|---|
| 1 | Mini tractors | 2018-19 | 8 | 0 | 0 |
| 2 | | 2019-20 | 1 | 0 | 0 |
| 3 | | 2020-21 | 0 | 0 | 0 |
| Total | | | 9 | 0 | 0 |

| Sl No | Details | Financial Year | General | Schedule Caste | Scheduled Tribe |
|---|---|---|---|---|---|
| 1 | Power Tillers | 2018-19 | 27 | 20 | 10 |
| 2 | | 2019-20 | 22 | 0 | 0 |
| 3 | | 2020-21 | 45 | 5 | 0 |
| Total | | | 94 | 25 | 10 |

| Sl No | Details | Financial Year | General | Schedule Caste | Scheduled Tribe |
|---|---|---|---|---|---|
| 1 | Other Farm Machineries | 2018-19 | 338 | 67 | 29 |
| 2 | | 2019-20 | 555 | 124 | 32 |
| 3 | | 2020-21 | 464 | 38 | 20 |
| Total | | | 1357 | 229 | 81 |

| | | |
|---|---|---|
| ಆ) | ಟ್ರ್ಯಾಕ್ಟರ್ ಮತ್ತು ಮಿನಿ ಟ್ರ್ಯಾಕ್ಟರ್ ವಾಹನಗಳು ಹಾಗೂ ಸಾಧನ ಸಲಕರಣೆಗಳನ್ನು ವಿತರಿಸಲು ಬಾಕಿ ಇರುವ ರೈತ ಫಲಾನುಭವಿಗಳೆಷ್ಟು; (ವಿವರ ನೀಡುವುದು) | ಮಿನಿ ಟ್ರ್ಯಾಕ್ಟರ್, ಪವರ್ ಟಿಲ್ಲರ್ ಹಾಗೂ ಸಾಧನ ಸಲಕರಣೆಗಳನ್ನು ವಿತರಿಸಲು ಬಾಕಿ ಇರುವ ರೈತ ಫಲಾನುಭವಿಗಳ ಅರ್ಜಿಗಳ ವಿವರ ಕೆಳಕಂಡಂತಿರುತ್ತದೆ: (ಭೌತಿಕ- ಸಂಖ್ಯೆಗಳಲ್ಲಿ) |

| ಕ್ರ.ಸಂ | ವಿವರ/ಪರಿಕರ | ಸಾಮಾನ್ಯ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
|---|---|---|---|---|
| 1 | ಮಿನಿ ಟ್ರ್ಯಾಕ್ಟರ್ | 22 | 69 | 16 |
| 2 | ಪವರ್ ಟಿಲ್ಲರ್ | 17 | 24 | 9 |
| 3 | ಇತರೆ ಸಾಧನ ಸಲಕರಣೆಗಳು | 50 | 59 | 26 |

The beneficiary wise details of pending applications for Mini Tractors, Power Tillers and other Farm Machineries are as follows :

(Physical-in numbers)

| Sl No | Particulars | General | Schedule Caste | Scheduled Tribe |
|---|---|---|---|---|
| 1 | Mini Tractors | 22 | 69 | 16 |
| 2 | Power Tillers | 17 | 24 | 9 |
| 3 | Other Farm Machineries | 50 | 59 | 26 |

| | | |
|---|---|---|
| ಇ) | ಬಾಕಿ ಇರುವ ರೈತ ಫಲಾನುಭವಿಗಳಿಗೆ ಸದರಿ ಸಲಕರಣೆಗಳನ್ನು ಯಾವಾಗ ವಿತರಿಸಲಾಗುವುದು? (ವಿವರ ನೀಡುವುದು) | ಪ್ರಸಕ್ತ ಸಾಲಿಗೆ ವಿವಿಧ ಸಹಾಯಧನ ಯೋಜನೆಗಳಡಿ ನಿಗಧಿಪಡಿಸಲಾಗಿರುವ ಕ್ರಿಯಾ ಯೋಜನೆಯನ್ವಯ ಮಿನಿ ಟ್ರ್ಯಾಕ್ಟರ್, ಪವರ್ ಟಿಲ್ಲರ್ ಹಾಗೂ ಸಾಧನ ಸಲಕರಣೆಗಳನ್ನು ವಿತರಿಸಲಾಗಿರುತ್ತದೆ. ಕೇಂದ್ರ ಪುರಸ್ಕೃತ ಎಸ್.ಎಂ.ಎ.ಎಂ ಯೋಜನೆಯಡಿ ಎರಡನೇ ಕಂತಿನ ಅನುದಾನವನ್ನು ಕೇಂದ್ರ ಸರ್ಕಾರವು ಬಿಡುಗಡೆಗೊಳಿಸಿದ್ದು, ಬಾಕಿ ಇರುವ ರೈತ ಫಲಾನುಭವಿಗಳಿಗೆ ಸದರಿ ಸಲಕರಣೆಗಳನ್ನು ಅನುಮೋದಿತ ಕ್ರಿಯಾ ಯೋಜನೆಯನ್ವಯ ವಿತರಿಸಲು ಕ್ರಮ ಕೈಗೊಳ್ಳಲಾಗಿರುತ್ತದೆ.<br><br>For the current financial year, as per the allocated action plan under various subsidy schemes Mini Tractors, Power Tillers and other Farm Machineries have already been distributed. Furthermore, under Centrally Sponsored SMAM scheme, II$^{nd}$ instalment fund has been released by Government of India and action has been taken to distribute machineries for pending beneficiaries as per the approved action plan. |

ಸಂಖ್ಯೆ: AGRI-ASC/15/2021

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1630

ಸದಸ್ಯರ ಹೆಸರು : ಶ್ರೀ ದೇವಾನಂದ್ ಫುಲಸಿಂಗ್ ಚವ್ಹಾಣ್(ನಾಗಠಾಣ)

ಉತ್ತರಿಸುವವರು : ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.

ಉತ್ತರಿಸಬೇಕಾದ ದಿನಾಂಕ : 10-03-2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ನಾಗಠಾಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕೇಂದ್ರಗಳೆಷ್ಟು; | ನಾಗಠಾಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಒಟ್ಟು 328 ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. |
| ಆ | ಸ್ವಂತ ಕಟ್ಟಡ ಹೊಂದಿರುವ ಅಂಗನವಾಡಿ ಕೇಂದ್ರಗಳೆಷ್ಟು ಹಾಗೂ ಬಾಡಿಗೆ ಕಟ್ಟಡದಲ್ಲಿರುವ ಅಂಗನವಾಡಿ ಕೇಂದ್ರಗಳೆಷ್ಟು; | 198 ಅಂಗನವಾಡಿ ಕೇಂದ್ರಗಳು ಸ್ವಂತ ಕಟ್ಟಡದಲ್ಲಿ, 90 ಅಂಗನವಾಡಿ ಕೇಂದ್ರಗಳು ಬಾಡಿಗೆ ಕಟ್ಟಡದಲ್ಲಿ ಮತ್ತು 40 ಅಂಗವಾಡಿ ಕೇಂದ್ರಗಳು ಇತರೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. |
| ಇ | ಅಂಗನವಾಡಿ ಕೇಂದ್ರಗಳಿಗೆ ಪೂರೈಸುತ್ತಿರುವ ಆಹಾರ ಪದಾರ್ಥಗಳು, ಕಳಪೆ ಗುಣಮಟ್ಟ ಹೊಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ.<br><br>ಅಂಗನವಾಡಿ ಕೇಂದ್ರಗಳಿಗೆ ಗುಣಮಟ್ಟದ ಆಹಾರ ಪದಾರ್ಥಗಳನ್ನು ಸರಬರಾಜು ಮಾಡಲಾಗುತ್ತಿದೆ. ಅಂಗನವಾಡಿ ಕೇಂದ್ರಗಳಿಗೆ ಆಹಾರ ಪದಾರ್ಥಗಳನ್ನು ಸರಬರಾಜು ಮಾಡುವ ಮೊದಲು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವಿಭಾಗೀಯ ಮಟ್ಟದ ಆಹಾರ ವಿಶ್ಲೇಷಣಾ ಪ್ರಯೋಗಾಲಯಗಳಲ್ಲಿ ಗುಣಮಟ್ಟವನ್ನು ಪರಿಶೀಲಿಸಲಾಗುತ್ತಿದೆ. |
| ಈ | ಅಂಗನವಾಡಿ ಕೇಂದ್ರಗಳಿಂದ ಮಕ್ಕಳಿಗೆ/ ಬಾಣಂತಿಯರಿಗೆ ಸರಿಯಾಗಿ ಪೌಷ್ಠಿಕ ಆಹಾರ ದೊರೆಯದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದಲ್ಲಿ, ಈ ಸಂಬಂಧ ಸರ್ಕಾರ ಕೈಗೊಂಡ ಕ್ರಮಗಳೇನು; | ಬಂದಿರುವುದಿಲ್ಲ.<br><br>ಅಂಗನವಾಡಿ ಕೇಂದ್ರಗಳಿಗೆ ಪೂರೈಸುವ ಆಹಾರ ಪದಾರ್ಥಗಳನ್ನು ಬಾಲವಿಕಾಸ ಸಮಿತಿಯು ಪರಿಶೀಲಿಸುತ್ತಿದ್ದು, ಇದನ್ನು ಅಂಗನವಾಡಿ ಕೇಂದ್ರಗಳಿಗೆ ಉಪ ನಿರ್ದೇಶಕರು, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಹಾಗೂ ಮೇಲ್ವಿಚಾರಕಿಯರು ಭೇಟಿ ನೀಡಿ ಖಚಿತಪಡಿಸಿಕೊಳ್ಳುತ್ತಿದ್ದಾರೆ ಮತ್ತು ಕೋವಿಡ್-19 ಇರುವ ಪ್ರಯುಕ್ತ ಅಂಗನವಾಡಿ ಕೇಂದ್ರದ ಫಲಾನುಭವಿಗಳ ಮನೆ ಬಾಗಿಲಿಗೆ ಆಹಾರ ಪದಾರ್ಥಗಳನ್ನು ಪೂರೈಸಲಾಗುತ್ತಿದೆ. |
| ಉ | ನಾಗಠಾಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಹೊಸ ಅಂಗನವಾಡಿ ಕೇಂದ್ರಗಳ ಮಂಜೂರಾತಿಗಾಗಿ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ ಯಾವಾಗ ಮಂಜೂರು ಮಾಡಲಾಗುವುದು? | ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

(ಶಶಿಕಲಾ ಅ. ಜೊಲ್ಲೆ)
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ,
ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ: ಮಮಇ 74 ಐಸಿಡಿ 2021

## ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1608
2) ಸದಸ್ಯರ ಹೆಸರು : ಶ್ರೀ. ಆನಂದ್ ಸಿದ್ದು ನ್ಯಾಮಗೌಡ
3) ಉತ್ತರಿಸಬೇಕಾದ ದಿನಾಂಕ : 10.03.2021
4) ಉತ್ತರಿಸುವವರು : ಮಾನ್ಯ ಮೂಲಸೌಲಭ್ಯ ಅಭಿವೃದ್ಧಿ ಹಾಗೂ ಹಜ್ ಮತ್ತು ವಕ್ಫ್ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಕುಡುಚಿ-ಬಾಗಲಕೋಟೆ ರೈಲ್ವೆ ಯೋಜನೆಯು ಕಜ್ಜಿಡೋಣಿವರೆಗೆ ಬಂದು ತಲುಪಿದ್ದು, ಈ ಯೋಜನೆಯನ್ನು ಕಜ್ಜಿಡೋಣಿಯಿಂದ ಕುಡಚಿಯವರೆಗೆ ಯಾವಾಗ ಪೂರ್ಣಗೊಳಿಸಲಾಗುವುದು; | ಬಾಗಲಕೋಟೆ -ಕುಡುಚಿ ನಡುವಿನ 30ಕಿ.ಮೀ ಮಾರ್ಗವು ಪೂರ್ಣಗೊಂಡಿದ್ದು, ರೈಲು ಸಂಚಾರವನ್ನು ಆರಂಭಿಸಲಾಗಿದೆ. ಕಜ್ಜಿದೋಣಿಯಿಂದ ಕುಡಚಿವರೆಗಿನ ಭೂಸ್ವಾಧೀನ ಪ್ರಕ್ರಿಯೆಯು ಪ್ರಗತಿಯಲ್ಲಿದ್ದು, ನೈರುತ್ಯ ರೈಲ್ವೆಯಿಂದ ಕಾಮಗಾರಿ ಕೈಗೊಳ್ಳಲಾಗುತ್ತಿದ್ದು, ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಮಿತಿ ನಿಗಧಿ ಪಡಿಸಿರುವುದಿಲ್ಲ. |
| ಆ | ಇನ್ನೂ ಎಷ್ಟು ಎಕರೆ ಜಮೀನನ್ನು ಭೂಸ್ವಾಧೀನ ಪಡಿಸಿಕೊಳ್ಳಲು ಪ್ರಕ್ರಿಯೆ ಆಗಬೇಕಾಗಿದೆ; (ಮಾಹಿತಿ ನೀಡುವುದು) | • ಈ ಯೋಜನೆಗೆ ಒಟ್ಟು 2489.15 ಎಕರೆ ಜಮೀನನ ಅಗತ್ಯವಿದೆ.<br>• ಈವರೆಗೂ 1330.20 ಎಕರೆ ಜಮೀನನ್ನು ಭೂಸ್ವಾದೀನ ಪಡಿಸಿಕೊಂಡು ರೈಲ್ವೆ ಇಲಾಖೆಗೆ ಹಸ್ತಾಂತರಿಸಲಾಗಿದೆ.<br>• ಉಳಿದ 1156.95 ಎಕರೆ ಭೂಮಿಯ ಸ್ವಾಧೀನ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| ಇ) | ಈ ಯೋಜನೆಗೆ ಇಲ್ಲಿಯವರೆಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಬಿಡುಗಡೆಯಾದ ಅನುದಾನವೆಷ್ಟು; ಖರ್ಚು ಮಾಡಿದ ಅನುದಾನವೆಷ್ಟು? (ಮಾಹಿತಿ ಒದಗಿಸುವುದು) | ಈ ಯೋಜನೆಗೆ ಇಲ್ಲಿಯವರೆಗೆ ಕೇಂದ್ರ ಸರ್ಕಾರವು ರೂ.174.00 ಕೋಟಿಗಳನ್ನು ಹಾಗೂ ರಾಜ್ಯ ಸರ್ಕಾರದಿಂದ ನಿರ್ಮಾಣ ಕಾಮಗಾರಿಗಾಗಿ ರೈಲ್ವೆ ಇಲಾಖೆಗೆ ರೂ. 148.84 ಕೋಟಿಗಳನ್ನು ಹಾಗೂ ಭೂಸ್ವಾದೀನ ವೆಚ್ಚಕಾಗಿ ರೂ.275.81 ಕೋಟಿಗಳನ್ನು ಒಟ್ಟಾರೆಯಾಗಿ ರೂ.424.65 ಕೋಟಿಗಳನ್ನು ಈ ಯೋಜನೆಗೆ ಬಿಡುಗಡೆಮಾಡಲಾಗಿದೆ.<br>ಬಿಡುಗಡೆ ಮಾಡಲಾದ ಸಂಪೂರ್ಣ ಅನುದಾನ ರೂ.322.84 ಕೋಟಿಗಳನ್ನು ನಿರ್ಮಾಣ ವೆಚ್ಚಕಾಗಿ ಬಳಕೆ ಮಾಡಲಾಗಿದೆ. |

ಸಂಖ್ಯೆ: ಮೂಅಇ 44 ರಾರಾಹೆ 2021/ಇ

**(ಆನಂದ್ ಸಿಂಗ್)**
**ಮೂಲಸೌಲಭ್ಯ ಅಭಿವೃದ್ಧಿ ಹಾಗೂ**
**ಹಜ್ ಮತ್ತು ವಕ್ಫ್ ಸಚಿವರು**

# ಕರ್ನಾಟಕ ವಿಧಾನಸಭೆ

ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ : 1615

ಸದಸ್ಯರ ಹೆಸರು : ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ)

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 10-03-2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ಯಾವ ಯಾವ ನಗರಗಳಲ್ಲಿ ಪ್ರಾದೇಶಿಕ ಸಾರಿಗೆ ಕಛೇರಿ ಮತ್ತು ಉಪ ಪ್ರಾದೇಶಿಕ ಸಾರಿಗೆ ಕಛೇರಿಗಳು ಕಾರ್ಯನಿರ್ವಹಿಸುತ್ತಿವೆ? | ರಾಜ್ಯದ ಸಾರಿಗೆ ಇಲಾಖೆಯಲ್ಲಿ ಪ್ರಸ್ತುತ ವಿವಿಧ ಜಿಲ್ಲಾ ಕೇಂದ್ರ, ನಗರ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಉಪ ಸಾರಿಗೆ ಆಯುಕ್ತರು ಹಾಗೂ ಹಿರಿಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ ಮತ್ತು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಗಳು ಕಾರ್ಯ ನಿರ್ವಹಿಸುತ್ತಿವೆ. ವಿವರಗಳನ್ನು **"ಅನುಬಂಧ"** ದಲ್ಲಿ ಒದಗಿಸಲಾಗಿದೆ. |
| (ಆ) | ರಾಜ್ಯದಲ್ಲಿ ಹೊಸದಾಗಿ ಯಾವ ಯಾವ ಸ್ಥಳಗಳಲ್ಲಿ ಪ್ರಾದೇಶಿಕ ಮತ್ತು ಉಪ ಪ್ರಾದೇಶಿಕ ಸಾರಿಗೆ ಕಛೇರಿಗಳನ್ನು ತೆರೆಯುವಂತೆ ಕೋರಿ ಪ್ರಸ್ತಾವನೆಗಳು ಬಂದಿರುತ್ತವೆ; | ರಾಜ್ಯದ ಸಾರಿಗೆ ಇಲಾಖೆಯಲ್ಲಿ ವಿವಿಧ ಜಿಲ್ಲಾ ಕೇಂದ್ರ, ನಗರ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಹೊಸದಾಗಿ ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಗಳನ್ನು ತೆರೆಯುವ ಕುರಿತು ಆಯುಕ್ತರು, ಸಾರಿಗೆ ಮತ್ತು ರಸ್ತೆ ಸುರಕ್ಷತೆ ಇವರಿಂದ ಈ ಕೆಳಕಂಡ ಪ್ರಸ್ತಾವನೆಗಳು ಸ್ವೀಕೃತಗೊಂಡಿರುತ್ತವೆ.<br>1. ಉಡುಪಿ ಜಿಲ್ಲೆಯ ಕುಂದಾಪುರ.<br>2. ರಾಯಚೂರು ಜಿಲ್ಲೆಯ ಸಿಂಧನೂರು ಅಥವಾ ಲಿಂಗಸುಗೂರು.<br>3. ವಿಜಯಪುರ ಜಿಲ್ಲೆಯ ಇಂಡಿ ಅಥವಾ ಸಿಂಧಗಿ.<br>4. ವಿಜಯಪುರ ಜಿಲ್ಲೆಯ ಮುದ್ದೇಬಿಹಾಳ.<br>5. ದಾವಣಗೆರೆ ಜಿಲ್ಲೆಯ ಹೊನ್ನಾಳಿ ಪಟ್ಟಣದಲ್ಲಿ. |
| (ಇ) | ರಾಜ್ಯದಲ್ಲಿ ಯಾವ ಯಾವ ಸ್ಥಳಗಳಲ್ಲಿ ಹೊಸದಾಗಿ ಪ್ರಾದೇಶಿಕ ಮತ್ತು ಉಪ ಪ್ರಾದೇಶಿಕ ಸಾರಿಗೆ ಕಛೇರಿಗಳನ್ನು ತೆರೆಯಲಾಗುವುದು ಹಾಗೂ ಈ ಕಛೇರಿಗಳನ್ನು ತೆರೆಯಲು ಇರುವ ಮಾನದಂಡಗಳೇನು? | ಹೊಸದಾಗಿ ಪ್ರಾದೇಶಿಕ/ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿ ತೆರೆಯಲು ನಿಗಧಿಪಡಿಸಿರುವ ಮಾನದಂಡಗಳು ಈ ಕೆಳಕಂಡಂತಿವೆ.<br>1. ಪ್ರಸ್ತಾಪಿತ ಉಪ ವಿಭಾಗ / ತಾಲ್ಲೂಕು ಕೇಂದ್ರಕ್ಕೆ ಒಳಪಡುವ ವ್ಯಾಪ್ತಿಯಲ್ಲಿ ಈಗಾಗಲೇ ನೊಂದಣಿಯಾಗಿ ಉಪಯೋಗದಲ್ಲಿರುವ ಎಲ್ಲಾ ವರ್ಗಗಳ ವಾಹನಗಳಿಂದ ಕನಿಷ್ಠ ರೂ.20.00 ಕೋಟಿ ರಾಜಸ್ವ ವಸೂಲಾಗುತ್ತಿರಬೇಕು. |

| | | |
|---|---|---|
| | | 2. ಪ್ರಸ್ತಾಪಿತ ಕಛೇರಿ ವ್ಯಾಪ್ತಿಯಲ್ಲಿ ಕನಿಷ್ಟ 30,000 ವಾಹನಗಳು ನೊಂದಣಿಯಾಗಿರಬೇಕು.<br>3. ಪ್ರಸ್ತಾಪಿತ ಕಛೇರಿ ವ್ಯಾಪ್ತಿಯಲ್ಲಿ ಕನಿಷ್ಟ 10,000 ಚಾಲನಾ ಲೈಸನ್ಸ್‌ಗಳ ನೀಡಿಕೆಯಾಗಿರಬೇಕು.<br>4. ಆ ಭಾಗದಲ್ಲಿ ವಾರ್ಷಿಕ ಸರಾಸರಿ 10,000 ವಾಹನಗಳು ನೋಂದಣಿಯಾಗಿರಬೇಕು.<br>5. ಪ್ರಸ್ತಾಪಿತ ಕಛೇರಿಯು ಮೂಲ ಕಛೇರಿಯಿಂದ ಗ್ರಾಮೀಣ ಭಾಗಗಳಿಗೆ 50 ಕಿ.ಮೀ. ಅಂತರದಲ್ಲಿರಬೇಕು.<br><br>ಈ ಮೇಲ್ಕಂಡ ಮಾನದಂಡಗಳು ಪೂರೈಕೆಯಾಗಿರುವ ಬಗ್ಗೆ ಪರಿಶೀಲಿಸಿ ಹೊಸದಾಗಿ ಪ್ರಾದೇಶಿಕ / ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯನ್ನು ತೆರೆಯಲು ಆರ್ಥಿಕ ಅಂಶಗಳನ್ನು ಗಣನೆಗೆ ತೆಗೆದುಕೊಂಡು ನಿಯಮಾನುಸಾರ ಕ್ರಮವಹಿಸಲಾಗುವುದು. |

ಟಿಡಿ 28 ಟಿಡಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.

**ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಶಿವಾನಂದ ಎಸ್. ಪಾಟೀಲ್ (ಬಸವನಬಾಗೇವಾಡಿ)ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1615 ಕ್ಕೆ "ಅನುಬಂಧ-ಅ"**

**ಕಛೇರಿಯ ನೋಂದಣಿ ಸಂಖ್ಯೆವಾರು ವಿವರ**

| ಕ್ರಮ ಸಂಖ್ಯೆ | ಕಛೇರಿ ನೋಂದಣಿ ಗುರುತಿನ ಸಂಖ್ಯೆ | ಕಛೇರಿಯ ಹೆಸರು |
|---|---|---|
| 1. | ಕೆಎ – 01 | ಪ್ರಾ.ಸಾ.ಅ., ಬೆಂಗಳೂರು (ಕೇಂದ್ರ) |
| 2. | ಕೆಎ – 02 | ಪ್ರಾ.ಸಾ.ಅ., ಬೆಂಗಳೂರು (ಪಶ್ಚಿಮ) |
| 3. | ಕೆಎ – 03 | ಪ್ರಾ.ಸಾ.ಅ., ಬೆಂಗಳೂರು (ಪೂರ್ವ) |
| 4. | ಕೆಎ – 04 | ಪ್ರಾ.ಸಾ.ಅ., ಬೆಂಗಳೂರು (ಉತ್ತರ) |
| 5. | ಕೆಎ – 05 | ಪ್ರಾ.ಸಾ.ಅ., ಬೆಂಗಳೂರು (ದಕ್ಷಿಣ) |
| 6. | ಕೆಎ – 06 | ಪ್ರಾ.ಸಾ.ಅ., ತುಮಕೂರು |
| 7. | ಕೆಎ – 07 | ಪ್ರಾ.ಸಾ.ಅ., ಕೋಲಾರ |
| 8. | ಕೆಎ – 08 | ಪ್ರಾ.ಸಾ.ಅ., ಕೆ.ಜಿ.ಎಫ್., |
| 9. | ಕೆಎ – 09 | ಉಪ ಸಾರಿಗೆ ಆಯುಕ್ತರು & ಹಿರಿಯ ಪ್ರಾ.ಸಾ.ಅ., ಮೈಸೂರು (ಪಶ್ಚಿಮ) |
| 10. | ಕೆಎ – 10 | ಪ್ರಾ.ಸಾ.ಅ., ಚಾಮರಾಜನಗರ |
| 11. | ಕೆಎ – 11 | ಪ್ರಾ.ಸಾ.ಅ., ಮಂಡ್ಯ |
| 12. | ಕೆಎ – 12 | ಪ್ರಾ.ಸಾ.ಅ., ಮಡಿಕೇರಿ |
| 13. | ಕೆಎ – 13 | ಪ್ರಾ.ಸಾ.ಅ., ಹಾಸನ |
| 14. | ಕೆಎ – 14 | ಪ್ರಾ.ಸಾ.ಅ., ಶಿವಮೊಗ್ಗ |
| 15. | ಕೆಎ – 15 | ಪ್ರಾ.ಸಾ.ಅ., ಸಾಗರ |
| 16. | ಕೆಎ – 16 | ಪ್ರಾ.ಸಾ.ಅ., ಚಿತ್ರದುರ್ಗ |
| 17. | ಕೆಎ – 17 | ಪ್ರಾ.ಸಾ.ಅ., ದಾವಣಗೆರೆ |
| 18. | ಕೆಎ – 18 | ಪ್ರಾ.ಸಾ.ಅ., ಚಿಕ್ಕಮಗಳೂರು |
| 19. | ಕೆಎ – 19 | ಉಪ ಸಾರಿಗೆ ಆಯುಕ್ತರು & ಹಿರಿಯ ಪ್ರಾ.ಸಾ.ಅ., ಮಂಗಳೂರು |
| 20. | ಕೆಎ – 20 | ಪ್ರಾ.ಸಾ.ಅ., ಉಡುಪಿ |
| 21. | ಕೆಎ – 21 | ಪ್ರಾ.ಸಾ.ಅ., ಪುತ್ತೂರು |
| 22. | ಕೆಎ – 22 | ಪ್ರಾ.ಸಾ.ಅ., ಬೆಳಗಾವಿ |
| 23. | ಕೆಎ – 23 | ಪ್ರಾ.ಸಾ.ಅ., ಚಿಕ್ಕೋಡಿ |
| 24. | ಕೆಎ – 24 | ಸ.ಪ್ರಾ.ಸಾ.ಅ., ಬೈಲಹೊಂಗಲ |

| | | |
|---|---|---|
| 25. | ಕೆಎ – 25 | ಪ್ರಾ.ಸಾ.ಅ., ಧಾರವಾಡ (ಪಶ್ಚಿಮ) |
| 26. | ಕೆಎ – 26 | ಪ್ರಾ.ಸಾ.ಅ., ಗದಗ |
| 27. | ಕೆಎ – 27 | ಪ್ರಾ.ಸಾ.ಅ., ಹಾವೇರಿ |
| 28. | ಕೆಎ – 28 | ಪ್ರಾ.ಸಾ.ಅ., ವಿಜಯಪುರ |
| 29. | ಕೆಎ – 29 | ಪ್ರಾ.ಸಾ.ಅ., ಬಾಗಲಕೋಟೆ |
| 30. | ಕೆಎ – 30 | ಪ್ರಾ.ಸಾ.ಅ., ಕಾರವಾರ |
| 31. | ಕೆಎ – 31 | ಪ್ರಾ.ಸಾ.ಅ., ಶಿರಸಿ |
| 32. | ಕೆಎ – 32 | ಉಪ ಸಾರಿಗೆ ಆಯುಕ್ತರು & ಹಿರಿಯ ಪ್ರಾ.ಸಾ.ಅ., ಕಲಬುರಗಿ |
| 33. | ಕೆಎ – 33 | ಪ್ರಾ.ಸಾ.ಅ., ಯಾದಗಿರಿ |
| 34. | ಕೆಎ – 34 | ಪ್ರಾ.ಸಾ.ಅ., ಬಳ್ಳಾರಿ |
| 35. | ಕೆಎ – 35 | ಪ್ರಾ.ಸಾ.ಅ., ಹೊಸಪೇಟೆ |
| 36. | ಕೆಎ – 36 | ಪ್ರಾ.ಸಾ.ಅ., ರಾಯಚೂರು |
| 37. | ಕೆಎ – 37 | ಪ್ರಾ.ಸಾ.ಅ., ಕೊಪ್ಪಳ |
| 38. | ಕೆಎ – 38 | ಪ್ರಾ.ಸಾ.ಅ., ಬೀದರ್ |
| 39. | ಕೆಎ – 39 | ಪ್ರಾ.ಸಾ.ಅ., ಬಾಲ್ಕಿ |
| 40. | ಕೆಎ – 40 | ಪ್ರಾ.ಸಾ.ಅ., ಚಿಕ್ಕಬಳ್ಳಾಪುರ |
| 41. | ಕೆಎ – 41 | ಪ್ರಾ.ಸಾ.ಅ., ಜ್ಞಾನಭಾರತಿ, ಬೆಂಗಳೂರು |
| 42. | ಕೆಎ – 42 | ಪ್ರಾ.ಸಾ.ಅ., ರಾಮನಗರ |
| 43. | ಕೆಎ – 43 | ಸ.ಪ್ರಾ.ಸಾ.ಅ., ದೇವನಹಳ್ಳಿ |
| 44. | ಕೆಎ – 44 | ಸ.ಪ್ರಾ.ಸಾ.ಅ., ತಿಪಟೂರು |
| 45. | ಕೆಎ – 45 | ಸ.ಪ್ರಾ.ಸಾ.ಅ., ಹೂಣಸೂರು |
| 46. | ಕೆಎ – 46 | ಸ.ಪ್ರಾ.ಸಾ.ಅ., ಸಕಲೇಶಪುರ |
| 47. | ಕೆಎ – 47 | ಸ.ಪ್ರಾ.ಸಾ.ಅ., ಹೊನ್ನಾವರ |
| 48. | ಕೆಎ – 48 | ಸ.ಪ್ರಾ.ಸಾ.ಅ., ಜಮಖಂಡಿ |
| 49. | ಕೆಎ – 49 | ಸ.ಪ್ರಾ.ಸಾ.ಅ., ಗೋಕಾಕ್ |
| 50. | ಕೆಎ – 50 | ಪ್ರಾ.ಸಾ.ಅ., ಯಲಹಂಕ, ಬೆಂಗಳೂರು |
| 51. | ಕೆಎ – 51 | ಪ್ರಾ.ಸಾ.ಅ., ಎಲೆಕ್ಟ್ರಾನಿಕ್ ಸಿಟಿ, ಬೆಂಗಳೂರು |
| 52. | ಕೆಎ – 52 | ಪ್ರಾ.ಸಾ.ಅ., ನೆಲಮಂಗಲ |
| 53. | ಕೆಎ – 53 | ಪ್ರಾ.ಸಾ.ಅ., ಕೆ.ಆರ್.ಪುರಂ, ಬೆಂಗಳೂರು |
| 54. | ಕೆಎ – 54 | ಸ.ಪ್ರಾ.ಸಾ.ಅ., ನಾಗಮಂಗಲ |

| | | |
|---|---|---|
| 55. | ಕೆಎ – 55 | ಪ್ರಾ.ಸಾ.ಅ., ಮೈಸೂರು (ಪೂರ್ವ) |
| 56. | ಕೆಎ – 56 | ಸ.ಪ್ರಾ.ಸಾ.ಅ., ಬಸವಕಲ್ಯಾಣ |
| 57. | ಕೆಎ – 57 | ಪ್ರಾ.ಸಾ.ಅ., ಶಾಂತಿನಗರ, ಬೆಂಗಳೂರು |
| 58. | ಕೆಎ – 59 | ಪ್ರಾ.ಸಾ.ಅ., ಚಂದಾಪುರ, ಬೆಂಗಳೂರು |
| 59. | ಕೆಎ – 63 | ಪ್ರಾ.ಸಾ.ಅ., ಧಾರವಾಡ (ಪೂರ್ವ) |
| 60. | ಕೆಎ – 64 | ಸ.ಪ್ರಾ.ಸಾ.ಅ., ಮಧುಗಿರಿ |
| 61. | ಕೆಎ – 65 | ಸ.ಪ್ರಾ.ಸಾ.ಅ., ದಾಂಡೇಲಿ |
| 62. | ಕೆಎ – 66 | ಸ.ಪ್ರಾ.ಸಾ.ಅ., ತರಿಕೆರೆ |
| 63. | ಕೆಎ – 67 | ಸ.ಪ್ರಾ.ಸಾ.ಅ., ಚಿಂತಾಮಣಿ |
| 64. | ಕೆಎ – 68 | ಸ.ಪ್ರಾ.ಸಾ.ಅ., ರಾಣಿಬೆನ್ನೂರು |
| 65. | ಕೆಎ – 69 | ಸ.ಪ್ರಾ.ಸಾ.ಅ., ರಾಮದುರ್ಗ |
| 66. | ಕೆಎ – 70 | ಸ.ಪ್ರಾ.ಸಾ.ಅ., ಬಂಟ್ವಾಳ |
| 67. | ಕೆಎ – 71 | ಸ.ಪ್ರಾ.ಸಾ.ಅ., ಅಥಣಿ |

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿನ ಪ್ರಶ್ನೆ : 1636
2. ಸದಸ್ಯರ ಹೆಸರು : ಶ್ರೀ ಬಸವನಗೌಡ ದದ್ದಲ(ರಾಯಚೂರು ಗ್ರಾಮಾಂತರ)
3. ಉತ್ತರಿಸಬೇಕಾದ ದಿನಾಂಕ :10.03.2021
4. ಉತ್ತರಿಸುವ ಸಚಿವರು : ಮಾನ್ಯ ಮೂಲಸೌಲಭ್ಯ ಅಭಿವೃದ್ಧಿ, ಹಜ್ ಮತ್ತು ವಕ್ಫ್ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| | | |
| ಅ | ರಾಯಚೂರಿನಲ್ಲಿ ವಿಮಾನ ನಿಲ್ದಾಣ ನಿರ್ಮಾಣ ಮಾಡುವ ಸಂಬಂಧ 2020-21 ನೇ ಸಾಲಿನ ಆಯವ್ಯಯದಲ್ಲಿ ಘೋಷಣೆಯಾಗಿದ್ದು, ಇದುವರೆವಿಗೂ ಸದರಿ ಕಾಮಗಾರಿಯನ್ನು ಪ್ರಾರಂಭಿಸದಿರಲು ಕಾರಣಗಳೇನು; (ಪೂರ್ಣ ವಿವರವನ್ನು ನೀಡುವುದು) | ರಾಯಚೂರು ಜಿಲ್ಲೆ ಯರಮರಸ್ ಇಲ್ಲಿ ವಿಮಾನ ನಿಲ್ದಾಣಕ್ಕಾಗಿ ಸ್ವಾಧೀನಪಡಿಸಿ ಕೊಂಡಿರುವ ಜಮೀನಿನ ಸುತ್ತಲು ಯರಮರಸ್ ಶಾಖೋತ್ಪನ್ನ ವಿದ್ಯುತ್ ಕೇಂದ್ರ, ವಿದ್ಯುತ್ ಮಾರ್ಗಗಳು ಮತ್ತು ಎತ್ತರದ ಚಿಮಿನಿಗಳು ಇರುವುದರಿಂದ ವಿಮಾನ ಹಾರಟಕ್ಕೆ ಅಡಚಣೆ ಉಂಟಾಗುತ್ತಿರುವುದನ್ನು ಪರಿಗಣನೆಯ ಹಂತದಲ್ಲಿದೆ. |
| ಆ | ಸದರಿ ನಿರ್ಮಾಣ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆ; (ಪೂರ್ಣ ವಿವರವನ್ನು ನೀಡುವುದು) | ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರದ ತಜ್ಞರ ತಂಡವು ಮಾರ್ಚ್-2021 ರಲ್ಲಿ ವಿಮಾನ ನಿಲ್ದಾಣದ ಸ್ಥಳ ಪರಿವೀಕ್ಷಣೆಯನ್ನು ಕೈಗೊಳ್ಳುವುದಾಗಿ ತಿಳಿಸಿರುತ್ತದೆ. ಈ ವರದಿಯನ್ನು ಆಧರಿಸಿ ಯೋಜನಾ ವರದಿಯನ್ನು ತಯಾರಿಸಲು ಸಮಾಲೋಚಕರನ್ನು ನೇಮಿಸಿ, ಅಭಿವೃದ್ಧಿ ಕಾರ್ಯವನ್ನು ಕೈಗೊಳ್ಳುವ ಬಗ್ಗೆ ಪರಿಶೀಲಿಸಲಾಗುವುದು. |
| ಇ | ಪ್ರಸ್ತುತ ಸಾಲಿನಲ್ಲಿ ವಿಮಾನ ನಿಲ್ದಾಣ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭ ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯಾ; | ಹೌದು |
| ಈ | ಹಾಗಿದ್ದಲ್ಲಿ, ಯಾವಾಗ ಪ್ರಾರಂಭಿಸಲಾಗುವುದು? | 2021-22 ನೇ ಸಾಲಿನಲ್ಲಿ ವಿಮಾನ ನಿಲ್ದಾಣ ಕಾಮಗಾರಿಯನ್ನು ಕೈಗೊಳ್ಳಲು ಪ್ರಸ್ತಾಪಿಸಲಾಗಿದೆ. |

ಸಂಖ್ಯೆ:ಮೂಅಇ 28 ರಾಅವಿ 2021

**(ಆನಂದ್ ಸಿಂಗ್)**
ಮೂಲಸೌಲಭ್ಯ ಅಭಿವೃದ್ಧಿ, ಹಜ್ ಮತ್ತು
ವಕ್ಫ್ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ : 1439

ಸದಸ್ಯರ ಹೆಸರು : ಶ್ರೀ. ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ)

ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ರೇಷ್ಮೆ ಸಚಿವರು

ಉತ್ತರಿಸಬೇಕಾದ ದಿನಾಂಕ : 10.03.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ತೋಟಗಾರಿಕೆ ಇಲಾಖೆಯ ಯೋಜನಾನುಷ್ಠಾನಗಳ ಪ್ರಗತಿಯ ಕುರಿತ ಗುರಿ ಮತ್ತು ಸಾಧನೆಗಳೇನು; (ವಿವರ ನೀಡುವುದು) | 2020-21ನೇ ಸಾಲಿನಲ್ಲಿ ತೋಟಗಾರಿಕೆ ಇಲಾಖೆಯ ವಿವಿಧ ಯೋಜನೆಗಳಡಿ ಒಟ್ಟು ರೂ.754.25 ಕೋಟಿಗಳ ಗುರಿ ನಿಗದಿಯಾಗಿದ್ದು, ಇಲ್ಲಿಯವರೆಗೆ ರೂ.582.77 ಕೋಟಿಗಳ ಸಾಧನೆಯಾಗಿರುತ್ತದೆ. ಯೋಜನಾವಾರು ವಿವರವನ್ನು ಅನುಬಂಧ-1ರಲ್ಲಿ ನೀಡಲಾಗಿದೆ.<br>During 2020-21, An amount of Rs.754.25 crores has been allocated under various schemes under Horticulture Department. So far expenditure incurred is Rs.582.77 crores. Scheme wise details are given in Annexure-1. |
| ಆ) | ಕರಾವಳಿ ಪ್ರದೇಶಗಳಲ್ಲಿ ತೋಟಗಾರಿಕೆ ಅಭಿವೃದ್ಧಿಗಾಗಿ ಇಲಾಖೆಯ ಯೋಜನಾನುಷ್ಠಾನಗಳಾವುವು; (ವಿವರ ನೀಡುವುದು) | 2020-21ನೇ ಸಾಲಿನಲ್ಲಿ ಕರಾವಳಿ ಪ್ರದೇಶದಲ್ಲಿ ತೋಟಗಾರಿಕೆ ಅಭಿವೃದ್ಧಿಗಾಗಿ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರವನ್ನು ಅನುಬಂಧ-2ರಲ್ಲಿ ಒದಗಿಸಲಾಗಿದೆ.<br>The details of schemes implemented by the Department during 2020-21 for the development of Horticulture in coastal regions are given in Annexure-2. |
| ಇ) | ತೆಂಗು, ಅಡಿಕೆ ಮತ್ತು ಗೇರು ಬೆಳೆಗಳ ಅಭಿವೃದ್ಧಿ ಕುರಿತು ಇಲಾಖೆಯವರು ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಹಾಗೂ ಯೋಜನೆಗಳಾವುವು; (ವಿವರ ಒದಗಿಸುವುದು) | ತೆಂಗು, ಅಡಿಕೆ ಮತ್ತು ಗೇರು ಬೆಳೆಗಳ ಅಭಿವೃದ್ಧಿ ಕುರಿತು ಇಲಾಖೆಯವರು ಹಮ್ಮಿಕೊಂಡಿರುವ ಕಾರ್ಯಕ್ರಮಗಳು ಹಾಗೂ ಯೋಜನೆಗಳ ವಿವರಗಳು ಈ ಕೆಳಗಿನಂತಿವೆ.<br>1. **ತೆಂಗು** – ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗಾಗಿ ತೆಂಗಿನಲ್ಲಿ ಸಂಯೋಜಿತ ಬೇಸಾಯ ಯೋಜನೆ.<br>• ತೆಂಗು ಪುನಃಶ್ಚೇತನ ಕಾರ್ಯಕ್ರಮ – ರೈತರಿಗೆ ರೂ.53,500/ಹೆಕ್ಟೇರ್‌ಗೆ ಎರಡು ವರ್ಷಗಳಲ್ಲಿ ಸಹಾಯಧನವನ್ನು ನೀಡಲಾಗುತ್ತಿದೆ.<br>• ತೆಂಗಿನ ತೋಟಗಳ ಪ್ರದೇಶ ವಿಸ್ತರಣೆ – ಹೊಸ ತೋಟ ಸ್ಥಾಪನೆಗಾಗಿ ರೈತರಿಗೆ ಹೆಕ್ಟೇರ್‌ಗೆ ಗರಿಷ್ಠ ರೂ.15000/- ಸಹಾಯಧನವನ್ನು ನೀಡಲಾಗುತ್ತಿದೆ.<br>• ಕೃಷಿ ಸಿಂಚಾಯಿ ಯೋಜನೆಯಡಿಯಲ್ಲಿ ಹನಿ ನೀರಾವರಿ ಅಳವಡಿಕೆಗೆ ರೈತರಿಗೆ ಸಹಾಯಧನವನ್ನು ನೀಡಲಾಗುತ್ತಿದೆ.<br>2. **ಅಡಿಕೆ** – ಕೃಷಿ ಸಿಂಚಾಯಿ ಯೋಜನೆಯಡಿಯಲ್ಲಿ ಅಡಿಕೆ ಬೆಳೆಯುವ ಸಾಂಪ್ರದಾಯಿಕ ಪ್ರದೇಶಗಳಲ್ಲಿ ಹನಿ ನೀರಾವರಿ ಅಳವಡಿಕೆಗೆ ರೈತರಿಗೆ ಸಹಾಯಧನವನ್ನು ನೀಡಲಾಗುತ್ತಿದೆ. |

| | | |
|---|---|---|
| | | 3.**ಗೇರು** - ಸಮಗ್ರ ತೋಟಗಾರಿಕಾ ಅಭಿವೃದ್ಧಿ ಯೋಜನೆಯಡಿ ಪ್ರದೇಶ ವಿಸ್ತರಣೆ ಕಾರ್ಯಕ್ರಮ – ಸಾಮಾನ್ಯ ವರ್ಗದ ರೈತರಿಗೆ ಶೇ.50 ರಂತೆ ರೂ.28820/ಹೆಕ್ಟೇರ್ ಹಾಗೂ ಪರಿಶಿಷ್ಟ ಜಾತಿ /ಪರಿಶಿಷ್ಟ ಪಂಗಡ ವರ್ಗದ ರೈತರಿಗೆ ಶೇ.90 ರಂತೆ ರೂ.51878/ ಹೆಕ್ಟೇರ್ ಸಹಾಯಧನವನ್ನು ನೀಡಲಾಗುತ್ತಿದೆ.<br><br>4. ತೆಂಗು ಅಡಿಕೆ ಮತ್ತು ಗೇರು ಸೇರಿದಂತೆ ತೋಟಗಾರಿಕೆ ಬೆಳೆಗಳಿಗೆ ಸಸ್ಯ ಸಂರಕ್ಷಣಾ ಔಷಧಿ ಖರೀದಿಗೆ ಸಹಾಯಧನ ನೀಡಿ ಉತ್ತೇಜನ ನೀಡಲಾಗುತ್ತಿದೆ.<br><br>5. ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ ಸದರಿ ಬೆಳೆಗಳನ್ನು ಬೆಳೆಯಲು ಆರ್ಥಿಕ ನೆರವು ನೀಡಿ ಪ್ರೋತ್ಸಾಹಿಸಲಾಗುತ್ತಿದೆ.<br><br>The Schemes and Programmes implemented by department for the development of Coconut, Arecanut and Cashew are as follows:-<br><br>**1.Coconut** –Integrated farming in coconut for productivity improvement scheme.<br>• Coconut rejuvenation programme – a Subsidy of Rs.53500/Ha is provided in 2 years.<br>• Area expansion under coconut gardens - a Subsidy of Rs.15000/ha is provided for establishing new gardens.<br>2. **Arecanut**- Under Pradhanamantri Krishi Sinchayi (PMKSY) Scheme, 90 percent subsidy is provided for drip installation in traditional areas of arecanut cultivation .<br>**3.Cashew** – under Comprehensive Horticulture Development programme 50% subsidy to the tune of Rs.28820/ha for general farmers and 90 percent subsidy to the tune of Rs.51878/ha for SC / ST farmers is provided for Area expansion programme.<br><br>4. subsidy is provided to purchase plant protection chemicals for coconut, arecanut and cashew including other horticulture crops in order to encourage them.<br>5. under Mahatma Gandhi National Rural Employment Guarantee Scheme, financial assistance is provided for growing these crops. |
| ಈ) | ಕೇಂದ್ರಾನುದಾನದ ಯೋಜನಾನುಷ್ಠಾನಗಳ ಕುರಿತ ವಿವರಗಳನ್ನು ನೀಡುವುದು? | ಕೇಂದ್ರಾನುದಾನದ ಯೋಜನಾನುಷ್ಠಾನಗಳ ಕುರಿತ ವಿವರಗಳನ್ನು ಅನುಬಂಧ-02 ರಲ್ಲಿ ಒದಗಿಸಲಾಗಿದೆ.<br>The details of Centrally sponsored schemes implemented is given in Annexure-2 |

**ಸಂಖ್ಯೆ: HORTI 107 HGM 2021**

**(ಆರ್. ಶಂಕರ್)**
**ತೋಟಗಾರಿಕೆ ಮತ್ತು ರೇಷ್ಮೆ ಸಚಿವರು**

LAQ-1439

ಅನುಬಂಧ-1

## 2020-21ನೇ ಸಾಲಿನಲ್ಲಿ ತೋಟಗಾರಿಕಾ ಇಲಾಖೆಯಡಿ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಪ್ರಗತಿ ವಿವರ

| ಕ್ರ. ಸಂ. | ಯೋಜನೆಗಳು | ಅನುದಾನ (ರೂ.ಲಕ್ಷಗಳಲ್ಲಿ) | |
|---|---|---|---|
| | | ವಾರ್ಷಿಕ ಗುರಿ | ಪ್ರಗತಿ (ಫೆಬ್ರುವರಿ-2021ರ ಅಂತ್ಯಕ್ಕೆ) |
| **I** | **ಕೇಂದ್ರ ನೆರವಿನ ಯೋಜನೆಗಳು** | | |
| 1 | ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ) | 26400.00 | 24086.46 |
| 2 | ರಾಷ್ಟ್ರೀಯ ತೋಟಗಾರಿಕೆ ಮಿಷನ್ | 17481.20 | 12431.86 |
| 3 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ | 7046.40 | 3185.41 |
| 4 | ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗೆ ತೆಂಗಿನಲ್ಲಿ ಸಂಯೋಜಿತ ಬೇಸಾಯ. | 1596.00 | 1233.58 |
| 5 | ರಾಷ್ಟ್ರೀಯ ಎಣ್ಣೆಕಾಳು ಮತ್ತು ಎಣ್ಣೆ ತಾಳೆ ಅಬಿಯಾನ ಯೋಜನೆ | 1000.00 | 527.73 |
| 6 | ಪರಂಪರಾಗತ ಕೃಷಿ ವಿಕಾಸ ಯೋಜನೆ | 680.00 | 17.31 |
| | **ಉಪ ಮೊತ್ತ** | **54203.60** | **41482.35** |
| **II** | **ರಾಜ್ಯವಲಯ ಯೋಜನೆಗಳು** | | |
| 1 | ಸಮಗ್ರ ತೋಟಗಾರಿಕಾ ಅಭಿವೃದ್ಧಿ | 12644.90 | 11364.69 |
| 2 | ತೋಟಗಾರಿಕೆ ಉದ್ಯಾನವನಗಳು ಮತ್ತು ತೋಟಗಳು | 1500.00 | 945.51 |
| 3 | ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ | 793.00 | 503.04 |
| 4 | ಕೃಷಿ ಕ್ಷೇತ್ರ ಮತ್ತು ಸಸ್ಯವಾಟಿಕೆಗಳ ಅಭಿವೃದ್ಧಿ ಮತ್ತು ನಿರ್ವಹಣೆ | 750.00 | 540.10 |
| 5 | ತೋಟಗಾರಿಕೆ ನಿಗಮ ಮತ್ತು ಮಂಡಳಿಗಳಿಗೆ ಸಹಾಯಧನ | 800.00 | 600.00 |
| 6 | ಇಲಾಖಾ ಪ್ರಯೋಗ ಶಾಲೆಗಳ ಅಭಿವೃದ್ಧಿ | 785.00 | 505.24 |
| 7 | ತೋಟಗಾರಿಕೆ ಕಟ್ಟಡಗಳು | 200.00 | 197.65 |
| 8 | ಮಧುವನ ಮತ್ತು ಜೇನು ಸಾಕಾಣಿ ಅಭಿವೃದ್ಧಿ | 500.00 | 326.35 |
| 9 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ | 130.00 | 63.00 |
| 10 | ತೋಟಗಾರಿಕೆ ಮೂಲ ಸೌಲಭ್ಯ ಅಭಿವೃದ್ಧಿ | 406.00 | 42.00 |
| 11 | ಬಾಗಲಕೋಟೆಯಲ್ಲಿ ತೋಟಗಾರಿಕ ವಿಶ್ವ ವಿದ್ಯಾಲಯದ ಬಂಡವಾಳ | 36.00 | 18.00 |
| | **ಉಪ ಮೊತ್ತ** | **18544.90** | **15105.58** |
| **III** | **ಜಿಲ್ಲಾವಲಯ ಯೋಜನೆಗಳು** | | |
| 1 | ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ | 1095.09 | 815.67 |
| 2 | ತೋಟಗಾರಿಕೆ ಕಟ್ಟಡಗಳು | 499.98 | 231.99 |
| 3 | ತೋಟಗಾರಿಕೆ ಕ್ಷೇತ್ರಗಳ ನಿರ್ವಹಣೆ | 312.20 | 209.17 |
| 4 | ಜೇನು ಸಾಕಾಣಿಕೆ | 250.95 | 169.64 |
| 5 | ಪ್ರಚಾರ ಮತ್ತು ಸಾಹಿತ್ಯ | 221.27 | 97.69 |
| 6 | ತೆಂಗು ಬೀಜ ಸಂಗ್ರಹಣೆ ಮತ್ತು ನರ್ಸರಿ ನಿರ್ವಹಣೆಗಾಗಿ ಯೋಜನೆ | 165.27 | 107.67 |
| 7 | ಶೀಥಲ ಗೃಹಗಳಿಗೆ ಸಹಾಯಧನ ಯೋಜನೆ | 69.86 | 41.96 |
| 8 | ರೈತರಿಗೆ ತರಬೇತಿ | 62.00 | 15.13 |
| | **ಉಪ ಮೊತ್ತ** | **2676.62** | **1688.92** |
| | ಒಟ್ಟು (I+II+III) | **75425.12** | **58276.85** |

ತೋಟಗಾರಿಕೆ ಜಂಟಿ ನಿರ್ದೇಶಕರು
(ಯೋಜನೆ)

ಅನುಬಂಧ-2

LAQ - 1439

## 2020-21ನೇ ಸಾಲಿನಲ್ಲಿ ಕರಾವಳಿ ಪ್ರದೇಶದಲ್ಲಿ ತೋಟಗಾರಿಕೆ ಅಭಿವೃದ್ಧಿಗಾಗಿ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರ

| ಕ್ರ. ಸಂ. | ಯೋಜನೆಯ ಹೆಸರು |
|---|---|
| **I** | **ಕೇಂದ್ರವಲಯ ಯೋಜನೆಗಳು** |
| **1** | **ಸಾಮಾರ್ಥ್ಯವುಳ್ಳ ರಾಜ್ಯಗಳಲ್ಲಿ ಎಣ್ಣೆ ತಾಳೆ ವ್ಯವಸಾಯ ಯೋಜನೆ** |
| a | ಹೊಸ ಪ್ರದೇಶ ವಿಸ್ತರಣೆ |
| b | ಒಂದನೇ ವರ್ಷದ ಬೇಸಾಯ ಸಹಾಯಧನ |
| c | ಎರಡನೇ ವರ್ಷದ ಬೇಸಾಯ ಸಹಾಯಧನ |
| d | ಮೂರನೇ ವರ್ಷದ ಬೇಸಾಯ ಸಹಾಯಧನ |
| e | ನಾಲ್ಕನೇ ವರ್ಷದ ಬೇಸಾಯ ಸಹಾಯಧನ |
| f | ತಾಳೆಹಣ್ಣುಗಳ ಸಾಗಾಣಿಕೆ ಸಹಾಯಧನ |
| g | ಡೀಸೆಲ್ ಪಂಪ್ ಸೆಟ್ ಕೊಳ್ಳಲು ಸಹಾಯಧನ |
| h | ಕೊಳವೆ ಬಾವಿಗೆ ಸಹಾಯಧನ |
| i | ಅಂತರ ಬೆಳೆಗೆ ಸಹಾಯಧನ |
| j | ಕಟಾವು ಉಪಕರಣಕ್ಕೆ ಸಹಾಯಧನ |
| k | ಮೋಟೊರೈಸ್ಡ್ ಚಿಸೆಲ್ |
| l | ತಾಳೆ ರೈತರಿಗೆ ತರಬೇತಿ |
| **2** | **ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ)** |
| a | ಸೂಕ್ಷ್ಮ ನೀರಾವರಿ ಪ್ರದೇಶ ವಿಸ್ತರಣೆ |
| **3** | **ಉತ್ಪಾದನಾ ಸುಧಾರಣಾ ಕಾರ್ಯ ಯೋಜನೆಗಾಗಿ ತೆಂಗಿನಲ್ಲಿ ಸಂಯೋಜಿತ ಬೇಸಾಯ** |
| **A** | **ಕೇಂದ್ರ ಅನುದಾನಿತ (CDB)** |
| a | ಹಳೆ ಪ್ರಾತ್ಯಕ್ಷಿತೆ ತಾಕುಗಳ ನಿರ್ವಹಣೆ |
| b | ಹೊಸ ಪ್ರಾತ್ಯಕ್ಷಿತೆ ತಾಕುಗಳ ನಿರ್ಮಾಣ |
| c | ತೆಂಗು ಪುನಃಶ್ಚೇತನ ಹಾಗೂ ಮರುನಾಟಿ ನಿರ್ವಹಣೆ ಕಾರ್ಯಕ್ರಮ |
| d | ತೆಂಗು ಪುನಃಶ್ಚೇತನ ಹಾಗೂ ಮರುನಾಟಿ ಕಾರ್ಯಕ್ರಮ |
| e | ಕಾರ್ಯಗಾರ |
| **B** | **ರಾಜ್ಯ ಸರ್ಕಾರ ಅನುದಾನಿತ ತೆಂಗು ಬೆಳೆ ಅಭಿವೃದ್ಧಿ ಯೋಜನೆ (ಶೇ.75 ರಂತೆ ಸಹಾಯಧನ)** |
| a | ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಕಾರ್ಯಕ್ರಮ |
| b | ಸಮಗ್ರ ಪೋಷಕಾಂಶ ನಿರ್ವಹಣೆ |
| c | ತೆಂಗಿನ ತೋಟಗಳ ಪ್ರದೇಶ ವಿಸ್ತರಣೆ |
| **4** | **ರಾಷ್ಟ್ರೀಯ ತೋಟಗಾರಿಕೆ ಮಿಷನ್** |
| a | ಸಸ್ಯಾಭಿವೃದ್ಧಿ |
| b | ಹೊಸ ಪ್ರದೇಶ ವಿಸ್ತರಣೆ |
| c | ಮೊದಲನೇ ಮತ್ತು ಎರಡನೇ ವರ್ಷದ ನಿರ್ವಹಣೆ |
| d | ಪುನಃಶ್ಚೇತನ |
| e | ಸಮಗ್ರ ಪೋಷಕಾಂಶ ಮತ್ತು ರೋಗ/ಕೀಟ ನಿರ್ವಹಣೆ |
| f | ಸಾವಯವ ಕೃಷಿ |
| g | ಕೊಯ್ಲೋತ್ತರ ನಿರ್ವಹಣೆ (PHM ಚಟುವಟಿಕೆಗಳು) |
| h | ಮಾರುಕಟ್ಟೆ |
| i | ನೀರು ಸಂಗ್ರಹಣಾ ಘಟಕ |
| j | ಸಂರಕ್ಷಿತ ಬೇಸಾಯ ಕಾರ್ಯಕ್ರಮ |
| k | ಯಾಂತ್ರೀಕರಣ |
| l | ಜೇನು ಕೃಷಿ |
| m | ಮಾನವ ಸಂಪನ್ಮೂಲ ಅಭಿವೃದ್ಧಿ |
| n | ಪ್ರಚಾರ ಮತ್ತು ಸಾಹಿತ್ಯ |
| o | ಅಣಬೆ ಬೇಸಾಯ |
| **5** | **ರಾಷ್ಟ್ರೀಯ ಕೃಷಿ ವಿಕಾಸ ಯೋಜನೆ** |
| a | ತೋಟಗಾರಿಕೆಯಲ್ಲಿ ಯಾಂತ್ರೀಕರಣ |
| b | ನೀರು ಸಂಗ್ರಹಣಾ ಘಟಕ |
| c | ಸಂರಕ್ಷಿತ ಬೇಸಾಯದಲ್ಲಿ ಪಾಲಿತೀನ್ ಶೀಟ್ ಹಾಗೂ ಗಿಡಗಳ ಬದಲಾವಣೆ |
| d | ಕೊಯ್ಲೋತ್ತರ ನಿರ್ವಹಣೆಗೆ ಉತ್ತೇಜನ |

ಅನುಬಂಧ-2

## 2020-21ನೇ ಸಾಲಿನಲ್ಲಿ ಕರಾವಳಿ ಪ್ರದೇಶದಲ್ಲಿ ತೋಟಗಾರಿಕೆ ಅಭಿವೃದ್ಧಿಗಾಗಿ ಇಲಾಖೆಯಿಂದ ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ವಿವರ

| ಕ್ರ. ಸಂ. | ಯೋಜನೆಯ ಹೆಸರು |
|---|---|
| e | ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಸಮಗ್ರ ತೋಟಗಾರಿಕಾ ಅಭಿವೃದ್ಧಿ |
| f | ಗಣಕೀಕರಣ |
| 6 | **ಪರಂಪರಾಗತ ಕೃಷಿ ವಿಕಾಸ ಯೋಜನೆ** |
| a | ಗುಚ್ಛ ರಚನೆ, ಸಾಮರ್ಥ್ಯಾಭಿವೃದ್ಧಿ, ಕ್ಷೇತ್ರೀಯ ಸಿಬ್ಬಂಧಿಗಳಿಗೆ ಅಧ್ಯಯನ ಪ್ರವಾಸ ಹಾಗೂ ತರಬೇತಿಯನ್ನೊಳಗೊಂಡಂತೆ |
| b | ಭೌತಿಕ ಪರಿಶೀಲನೆ, ಹಿಂಬರಹ ಪ್ರಮಾಣೀಕರಣ ಮತ್ತು ಪ್ರಮಾಣ ಪತ್ರ ವಿತರಣೆ ಕಾರ್ಯಗಳಿಗೆ ಪ್ರಾಂತೀಯ ಪರಿಷತ್ತುಗಳಿಗೆ ಸೇವಾ ವೆಚ್ಚ |
| c | ಸಾವಯವ ಪರಿವರ್ತನೆಗಾಗಿ ರೈತರ ಜಮೀನಿನಲ್ಲಿಯೇ ಜೈವಿಕ ಪರಿಕರಗಳ ಉತ್ಪಾದನೆಗಾಗಿ ಮೂಲಭೂತ ಸೌಕರ್ಯಗಳ ಸೃಜನೆಗೆ ಮತ್ತು ಅವಶ್ಯ ಪರಿಕರಗಳ ಖರೀದಿ ಮತ್ತು ಪೂರೈಕೆಗೆ ನಗದು (DBT) ರೂಪದಲ್ಲಿ ಸಹಾಯ |
| d | ಮೌಲ್ಯವರ್ಧನೆ, ಮಾರುಕಟ್ಟೆ ಮತ್ತು ಪ್ರಚಾರ |
| e | ಬ್ರಾಂಡ್ ಸೃಜನೆ, ವ್ಯಾಪರ ಮೇಳಗಳು, ಪ್ರದರ್ಶನ ಮತ್ತು ಸ್ಥಳೀಯ ಪ್ರಚಾರ, ಸಾವಯವ ಸಂತೆ, ಸ್ಥಳೀಯ ಮಾರುಕಟ್ಟೆ ಉಪ ಕ್ರಮಗಳು, ರಾಷ್ಟ್ರೀಯ ವ್ಯಾಪಾರ ಮೇಳಗಳಲ್ಲಿ ಭಾಗವಹಿಸುವುದು (ಇಲಾಖೆ ಮೂಲಕ) |
| II | **ರಾಜ್ಯವಲಯ ಯೋಜನೆಗಳು** |
| 1 | **ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ** |
| a | **8 BHP & above Power Tiller** ಖರೀದಿಗೆ ಸಹಾಯಧನ (ಪರಿಶಿಷ್ಟ ಜಾತಿ/ಪಂಗಡದ ರೈತರಿಗೆ) |
| 2 | **ಸಮಗ್ರ ತೋಟಗಾರಿಕಾ ಅಭಿವೃದ್ಧಿ** |
| a | ಹೂವಿನ ಬೆಳೆಗಾರರಿಗೆ ಪರಿಹಾರಧನ |
| b | ಹಣ್ಣು ಮತ್ತು ತರಕಾರಿ ಬೆಳೆಗಾರರಿಗೆ ಪರಿಹಾರಧನ |
| 3 | **ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗ ಸಮಗ್ರ ನಿಯಂತ್ರಣ ಯೋಜನೆ** |
| a | ಸಸ್ಯ ಸಂರಕ್ಷಣೆ ಔಷಧಿಗಳ ವಿತರಣೆ (ಸಾಮಾನ್ಯ) |
| b | ವಿಶೇಷ ಘಟಕ ಯೋಜನೆಯಡಿ ಸಸ್ಯ ಸಂರಕ್ಷಣೆ ಔಷದಿಗಳ ಖರೀದಿ (ಪ.ಜಾ.) |
| c | ಗಿರಿಜನ ಉಪಯೋಜನೆ ಯೋಜನೆಯಡಿ ಸಸ್ಯ ಸಂರಕ್ಷಣೆ ಔಷದಿಗಳ ಖರೀದಿ (ಪ.ಪಂ.) |
| 4 | **ಮಧುವನ ಮತ್ತು ಜೇನು ಸಾಕಾಣಿಕೆ ಅಭಿವೃದ್ಧಿ** |
| a) | ತರಬೇತಿ ಕಾರ್ಯಕ್ರಮಗಳು |
| b) | ಜೇನು ಪೆಟ್ಟಿಗೆ, ಜೇನು ಕುಟುಂಬ ಹಾಗೂ ಸ್ಟ್ಯಾಂಡ್ ಖರೀದಿಗೆ ಸಹಾಯಧನ |
| c) | ಖಾಸಗಿ ಮಧುವನಗಳ ಸ್ಥಾಪನೆಗೆ ಸಹಾಯ |
| d) | ಜೇನು ಸಂಸ್ಕರಣಾ ಘಟಕ ಸ್ಥಾಪನೆಗೆ ಸಹಾಯಧನ |
| g) | ಪ್ರಚಾರ/ಸಾಹಿತ್ಯ/ಶೈಕ್ಷಣಿಕ/ಅಧ್ಯಯನ ಪ್ರವಾಸ ಹಾಗೂ ಉತ್ತೇಜನ ಚಟುವಟಿಕೆಗಳು |
| III | **ಜಿಲ್ಲಾ ವಲಯ ಯೋಜನೆಗಳು** |
| 1 | **ತೋಟಗಾರಿಕೆ ಬೆಳೆಗಳಿಗೆ ವಿಶೇಷ ಹನಿ ನೀರಾವರಿ** |
| a | ಪ್ರದೇಶ ವಿಸ್ತರಣೆ |
| 2 | **ಪ್ರಚಾರ ಮತ್ತು ಸಾಹಿತ್ಯ** |
| 3 | **ಜೇನು ಸಾಕಾಣಿಕೆ** |
| a | ತರಬೇತಿ ಕಾರ್ಯಕ್ರಮಗಳು |
| b | ಜೇನು ಪೆಟ್ಟಿಗೆ, ಜೇನು ಕುಟುಂಬ ಹಾಗೂ ಸ್ಟ್ಯಾಂಡ್ ಖರೀದಿಗೆ ಸಹಾಯಧನ |
| 4 | ರೈತರಿಗೆ ತರಬೇತಿ |

ತೋಟಗಾರಿಕೆ ಜಂಟಿ ನಿರ್ದೇಶಕರು
(ಯೋಜನೆ)



# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1780

ಸದಸ್ಯರ ಹೆಸರು : ಡಾ॥ ಭರತ್ ಶೆಟ್ಟಿ ವೈ. (ಮಂಗಳೂರು ನಗರ ಉತ್ತರ)

ಉತ್ತರಿಸಬೇಕಾದ ದಿನಾಂಕ : 10-03-2021.

ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | 2017-18 ನೇ ಸಾಲಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಶ್ರಮಶಕ್ತಿ ಯೋಜನೆಯಡಿಯಲ್ಲಿ ಆಯ್ಕೆಯಾದ ಫಲಾನುಭವಿಗಳ ಸಂಖ್ಯೆ ಎಷ್ಟು; | 2017-18ನೇ ಸಾಲಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಶ್ರಮಶಕ್ತಿ ಯೋಜನೆಯಡಿಯಲ್ಲಿ ಆಯ್ಕೆಯಾದ ಫಲಾನುಭವಿಗಳ ಸಂಖ್ಯೆ : 3879 |
| ಆ. | ಈ ಜಿಲ್ಲೆಯಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ಮಂಜೂರು ಮಾಡಲಾದ ಹಣ ಎಷ್ಟು; ಬಾಕಿ ಉಳಿದಿರುವ ಫಲಾನುಭವಿಗಳು ಎಷ್ಟು ಮತ್ತು ಇವರುಗಳಿಗೆ ಬಾಕಿ ಮೊತ್ತವನ್ನು ಯಾವಾಗ ನೀಡಲಾಗುವುದು;(ವಿವರ ನೀಡುವುದು) | • ಈ ಜಿಲ್ಲೆಯಲ್ಲಿ ಆಯ್ಕೆಯಾದ ಫಲಾನುಭವಿಗಳಿಗೆ ರೂ.1002.75 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ.<br>• ಬಾಕಿ ಉಳಿದಿರುವ ಫಲಾನುಭವಿಗಳ ಸಂಖ್ಯೆ 14.<br>• 14 ಫಲಾನುಭವಿಗಳಿಗೆ ರೂ.25,000/- ರಂತೆ ಒಟ್ಟು ರೂ.3,50,000/- (ಮೂರು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಕೆ.ಎಂ.ಡಿ.ಸಿ. ಕೇಂದ್ರ ಕಛೇರಿಯಿಂದ ಜಿಲ್ಲಾ ಕಛೇರಿಗೆ ಫಲಾನುಭವಿಗಳ ಬ್ಯಾಂಕ್ ಖಾತೆಗಳಿಗೆ ನೇರವಾಗಿ NEFT ಮಾಡಲು ಹಣವನ್ನು ಬಿಡುಗಡೆ ಮಾಡಲಾಗಿದೆ. |
| ಇ | ಉಳಿದಿರುವ ಫಲಾನುಭವಿಗಳಿಗೆ ಹಣ ಪಾವತಿ ಮಾಡಲು ಯಾವುದೇ ರೀತಿಯ ಕ್ರಮ ಕೈಗೊಳ್ಳದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಈ | ಬಂದಿದ್ದಲ್ಲಿ, ಉಳಿದ ಫಲಾನುಭವಿಗಳಿಗೆ ಹಣ ಪಾವತಿ ಮಾಡಲು ಯಾವಾಗ ಅನುದಾನ ಬಿಡುಗಡೆ ಮಾಡಲಾಗುವುದು? | ಉಳಿದ 14 ಫಲಾನುಭವಿಗಳಿಗೆ ಹಣ ಬಿಡುಗಡೆ ಮಾಡಲು ಈಗಾಗಲೇ ಕ್ರಮ ವಹಿಸಲಾಗಿದೆ. |

ಸಂಖ್ಯೆ: **MWD 66 LMQ 2021**

(ಶ್ರೀಮಂತ ಬಾಳಾಸಾಹೇಬ ಪಾಟೀಲ್)
ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ
ಕಲ್ಯಾಣ ಸಚಿವರು



# KARNATAKA LEGISLATIVE ASSEMBLY

1. Starred Question No. : 1780
2. Name of the Member : Dr. Bharath Shetty Y (Mangalore North )
3. Date of reply : 10-03-2021.
4. Replies to be given by : Minister for Handloom, Textile & Minority Welfare.

| | Question | Answers |
|---|---|---|
| A) | How many beneficiaries are selected from Dakshina Kannada District under the Shrama Shakthi Scheme in the year 2017-18 | During the year 2017-18, 3879 beneficiaries were selected under the Shrama Shakthi Scheme from Dakshina Kannada District. |
| B) | How much amount sanctioned for the selected beneficiaries in this District; how many beneficiaries are pending for sanction and when the amount will be sanctioned to them (details to be provided)? | • A sum of Rs.1002.75 Lakhs have been released to beneficiaries through NEFT.<br>• Remaining 14 beneficiaries<br>• For the balance of 14 beneficiaries, an amount of Rs.3,50,000/- at the rate of Rs.25,000/- each have been already sanctioned from KMDC Head Office to District Office for releasing amount to beneficiaries through NEFT. |
| C) | Has the Government noticed that no action has been taken to release amount for the remaining beneficiaries? | Yes |
| D) | If so, when will the amount be released to remaining beneficiaries? | Already action has been taken to release the amount to 14 beneficiaries. |

File No. MWD 66 LMQ 2021

**(Shrimant Balasaheb Patil)**
Minister for Handloom,Textile &
Minority Welfare

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: : 1670

ಸದಸ್ಯರ ಹೆಸರು : ಶ್ರೀ ರೇವಣ್ಣ ಹೆಚ್.ಡಿ (ಹೊಳೆನರಸೀಪುರ)

ಉತ್ತರಿಸುವ ದಿನಾಂಕ: : 10/03/2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆ ಹೊಳೆನರಸೀಪುರ ತಾಲ್ಲೂಕಿನ ಸಹಾಯಕ ಕೃಷಿ ನಿರ್ದೇಶಕರ ಕಛೇರಿಯಲ್ಲಿ ಹಲವಾರು ವರ್ಷಗಳಿಂದ ಸಹಾಯಕ ಕೃಷಿ ಅಧಿಕಾರಿಗಳು ಹಾಗೂ ಸಿಬ್ಬಂದಿಗಳ ಹುದ್ದೆಗಳು ಖಾಲಿ ಇರುವುದರಿಂದ ರೈತರ ಹಾಗೂ ಸರ್ಕಾರಿ ಕೆಲಸ ಕಾರ್ಯಗಳಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೊಳೆನರಸೀಪುರ ತಾಲ್ಲೂಕಿನಲ್ಲಿ ಹುದ್ದೆಗಳು ಖಾಲಿ ಇರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಹುದ್ದೆಗಳ ವಿವರವನ್ನು **ಅನುಬಂಧ-1**ರಲ್ಲಿ ನೀಡಲಾಗಿದೆ.. |
| ಆ) | ಹಾಗಿದ್ದಲ್ಲಿ, ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | ಕೃಷಿ ಇಲಾಖೆಗೆ 2018-19ನೇ ಸಾಲಿನಲ್ಲಿ ನೇರ ನೇಮಕಾತಿ ಮಾಡಿಕೊಂಡಿದ್ದು, ಅದರಲ್ಲಿ ಹಾಸನ ಜಿಲ್ಲೆಗೆ ಸಹಾಯಕ ಕೃಷಿ ನಿರ್ದೇಶಕರು 05, ಕೃಷಿ ಅಧಿಕಾರಿ 17, ಸಹಾಯಕ ಕೃಷಿ ಅಧಿಕಾರಿ 01 ಹುದ್ದೆಗಳನ್ನು ಭರ್ತಿ ಮಾಡಲಾಗಿದೆ.<br><br>ಪ್ರಥಮ ದರ್ಜೆ ಸಹಾಯಕರು ಮತ್ತು ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದೆ ಹಾಗೂ ಮುಂಬಡ್ತಿ ಕೋಟಾದಡಿ ಖಾಲಿ ಇರುವ ಹುದ್ದೆಗಳನ್ನು ಸಹ ನಿಯಮಾನುಸಾರ ಬಡ್ತಿ ಮೂಲಕ ಭರ್ತಿ ಮಾಡುವ ಪ್ರಕ್ರಿಯೆ ಜಾರಿಯಲ್ಲಿದೆ.<br><br>ಕೃಷಿ ಚಟುವಟಿಕೆಗಳನ್ನು ಸಮರ್ಪಕವಾಗಿ ಸಕಾಲದಲ್ಲಿ ಕಾರ್ಯನಿರ್ವಹಿಸುವ ಸಲುವಾಗಿ ಹೊಳೆನರಸೀಪುರ ತಾಲ್ಲೂಕಿನಲ್ಲಿ 08 ವಿವಿಧ ಹುದ್ದೆಗಳಿಗೆ ಹೊರಗುತ್ತಿಗೆ ಆಧಾರದ ಮೇಲೆ ಪಡೆದು ಕಾರ್ಯನಿರ್ವಹಿಸಲಾಗುತ್ತಿದೆ. ಸದರಿ ಹುದ್ದೆಗಳ ವಿವರಗಳನ್ನು **ಅನುಬಂಧ-2**ರಲ್ಲಿ ನೀಡಲಾಗಿದೆ. |

**ಸಂಖ್ಯೆ: AGRI-AGS-45/2021**

(ಬಿ.ಸಿ. ಪಾಟೀಲ್)
ಕೃಷಿ ಸಚಿವರು

ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರೇವಣ್ಣ ಹೆಚ್.ಡಿ. (ಹೊಳೆನರಸೀಪುರ) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1670ಕ್ಕೆ ಅನುಬಂಧ-1

| ಕ್ರ.ಸಂ | ಹುದ್ದೆಗಳ ವಿವರ | ಮಂಜೂರು | ಭರ್ತಿ | ಖಾಲಿ |
|---|---|---|---|---|
| 1 | ಸಹಾಯಕ ಕೃಷಿ ನಿರ್ದೇಶಕರು | 1 | 1 | 0 |
| 2 | ಕೃಷಿ ಅಧಿಕಾರಿ | 5 | 2 | 3 |
| 3 | ಸಹಾಯಕ ಕೃಷಿ ಅಧಿಕಾರಿ | 10 | 0 | 10 |
| 4 | ಅಧೀಕ್ಷಕರು | 1 | 0 | 1 |
| 5 | ಪ್ರಥಮ ದರ್ಜೆ ಸಹಾಯಕರು | 1 | 1 | 0 |
| 6 | ದ್ವಿತೀಯ ದರ್ಜೆ ಸಹಾಯಕರು | 2 | 1 | 1 |
| 7 | ಬೆರಳಚ್ಚುಗಾರರು | 1 | 0 | 1 |
| 8 | ವಾಹನ ಚಾಲಕ | 1 | 0 | 1 |
| 9 | ಗ್ರೂಪ್-ಡಿ | 3 | 1 | 2 |
|  | ಒಟ್ಟು | 25 | 6 | 19 |

**ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ರೇವಣ್ಣ ಹೆಚ್.ಡಿ. (ಹೊಳೆನರಸೀಪುರ)**
**ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 1670ಕ್ಕೆ ಅನುಬಂಧ-2**

| ಕ್ರ. ಸಂ | ಕಚೇರಿ | ಸಹಾಯಕ ತಾಂತ್ರಿಕ ವ್ಯವಸ್ಥಾಪಕರು (ಎಟಿಎಂ) | ತಾಲ್ಲೂಕು ತಾಂತ್ರಿಕ ವ್ಯವಸ್ಥಾಪಕರು (ಬಿಟಿಎಂ) | ರೈ.ಸಂ.ಕೇ ಹೊರಗುತ್ತಿಗೆ ಸಿಬ್ಬಂದಿ | ಬೆರಳಚ್ಚು ಗಾರರು | ಗ್ರೂಪ್- ಡಿ | ಒಟ್ಟು |
|---|---|---|---|---|---|---|---|
| 1 | ಸಕೃನಿ, ಹೊಳೆನರಸೀಪುರ | 2 | 1 | 3 | 1 | 1 | 8 |